# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | **35** |
| **ಸದಸ್ಯರ ಹೆಸರು** | : | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು) |
| **ಉತ್ತರಿಸಬೇಕಾದ ದಿನಾಂಕ** | : | 13.12.2021 |
| **ಉತ್ತರಿಸುವ ಸಚಿವರು** | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಸೌರ ಶಕ್ತಿ ವಿದ್ಯುತ್ ಮೇಲ್ಛಾವಣಿ (ಸೋಲಾರ್ ರೂಫ್ ಟಾಪ್) ಪ್ರೋತ್ಸಾಹಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು: | ಬೀದರ್ ಜಿಲ್ಲೆ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಯ ಗೃಹ ಬಳಕೆ ಗ್ರಾಹಕರು ತಮ್ಮ ಮನೆಗಳ ಮೇಲೆ ಸೌರ ಶಕ್ತಿ ವಿದ್ಯುತ್ ಮೇಲ್ಛಾವಣಿ ಘಟಕಗಳನ್ನು ಅಳವಡಿಸಿಕೊಳ್ಳಲು ಭಾರತ ಸರ್ಕಾರದ ಸೌರ ಗೃಹ ಯೋಜನೆ ಅಡಿಯಲ್ಲಿ 3 kWp ವರೆಗೆ ಮಾನದಂಡ ವೆಚ್ಚದ ಶೇ 40% ಹಾಗೂ 4 kWp ಯಿಂದ 10 kWp ವರೆಗೆ ಮಾನದಂಡ ವೆಚ್ಚದ ಶೇಕಡಾ 20% ರಷ್ಟು ಅನುದಾನ ನೀಡುವ ಮೂಲಕ ಸೌರ ಶಕ್ತಿ ವಿದ್ಯುತ್ ಮೇಲ್ಛಾವಣಿ (ಸೋಲಾರ್ ರೂಫ್ ಟಾಪ್) ಪ್ರೋತ್ಸಾಹಿಸಲಾಗುತ್ತಿದೆ. |
| ಆ) | ಬೀದರ್ ಜಿಲ್ಲೆಯಲ್ಲಿ ಸೌರ ಶಕ್ತಿ ಮುಖಾಂತರ ಎಷ್ಟು ವಿದ್ಯುತ್ ಉತ್ಪಾದನೆ ಮಾಡಲು ಗುರಿ ಇಟ್ಟುಕೊಳ್ಳಲಾಗಿದೆ : ಪ್ರತಿ ಯೂನಿಟ್‌ಗೆ ಎಷ್ಟು ದರವನ್ನು ನಿಯಂತ್ರಣ ಆಯೋಗದಿಂದ ನಿಗದಿಪಡಿಸಲಾಗಿದೆ : | ಸೌರ ಗೃಹ ಯೋಜನೆ ಅಡಿಯಲ್ಲಿ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಸೌರ ಶಕ್ತಿ ವಿದ್ಯುತ್ ಮೇಲ್ಛಾವಣಿ ಘಟಕಗಳನ್ನು ಅಳವಡಿಸಲು 10 MWp ಹಂಚಿಕೆಯಾಗಿದೆ/ಗುರಿ ಇಟ್ಟುಕೊಳ್ಳಲಾಗಿದೆ. ಬೀದರ್ ಜಿಲ್ಲೆ ಸೇರಿದಂತೆ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಗ್ರಾಹಕರು ಈ ಯೋಜನೆಯ ಲಾಭ ಪಡೆಯಬಹುದಾಗಿದೆ. ಮೊದಲು ಬಂದವರಿಗೆ ಮೊದಲ ಸೇವೆ ಮೇರೆಗೆ ಸೌರ ಶಕ್ತಿ ವಿದ್ಯುತ್ ಮೇಲ್ಛಾವಣಿ ಘಟಕಗಳನ್ನು ಅಳವಡಿಸಲಾಗುವುದು.<br><br>ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ದಿನಾಂಕ: 18-08-2021 ರ ಆದೇಶದಲ್ಲಿ ಪ್ರತಿ ಯೂನಿಟ್‌ಗೆ ಕೆಳಗಿನಂತೆ ದರ ನಿಗದಿಪಡಿಸಿರುತ್ತದೆ.<br><br>i) ಗ್ರಿಡ್ ಸಂಪರ್ಕಿತ 1 kWp ಯಿಂದ 2000 kWp ವರೆಗಿನ (1 kWp ಯಿಂದ 10 kWp ಸೌರ ಮೇಲ್ಛಾವಣಿ ಘಟಕಗಳನ್ನು ಹೊರತುಪಡಿಸಿ) ಸೌರ ಮೇಲ್ಛಾವಣಿ ಘಟಕಗಳಿಗೆ ಪ್ರತಿ ಯೂನಿಟ್ ಗೆ ರೂ.3.19 ಪೈಸೆ ದರ ನಿಗದಿ ಪಡಿಸಿದೆ.<br>ii) ಗ್ರಿಡ್ ಸಂಪರ್ಕಿತ 1 kWp ಯಿಂದ 10 kWp ವರೆಗಿನ ಸೌರ ಮೇಲ್ಛಾವಣಿ ಘಟಕಗಳಿಗೆ (ಗೃಹ ಬಳಕೆದಾರರಿಗೆ) ಸಹಾಯಧನ ಪಡೆದಲ್ಲಿ ಪ್ರತಿ ಯೂನಿಟ್ ಗೆ ರೂ.2.67 ಪೈಸೆ ಹಾಗೂ ಸಹಾಯಧನ ಪಡೆಯದಿದ್ದಲ್ಲಿ ಪ್ರತಿ ಯೂನಿಟ್ ಗೆ ರೂ.4.02 ಪೈಸೆ ದರ ನಿಗದಿ ಪಡಿಸಿದೆ. |

| | | |
|---|---|---|
| ಇ) | ಇಂಧನ ಇಲಾಖೆಯಿಂದ ಸೌರ ಶಕ್ತಿ ಮೇಲ್ಛಾವಣಿ ಘಟಕವನ್ನು ಪ್ರೋತ್ಸಾಹಿಸಲು ಬ್ಯಾಂಕ್ ಸೌಲಭ್ಯ ನೀಡಲು ಸರ್ಕಾರದಿಂದ ನಿರ್ದೇಶನ ನೀಡಲಾಗಿದೆಯೇ ? | ಇಂಧನ ಇಲಾಖೆಯಿಂದ ಸೌರ ಶಕ್ತಿ ಮೇಲ್ಛಾವಣಿ ಘಟಕವನ್ನು ಪ್ರೋತ್ಸಾಹಿಸಲು ಬ್ಯಾಂಕ್ ಸೌಲಭ್ಯ ನೀಡಲು ಸೌರ ಗೃಹ ಯೋಜನೆ ಅಡಿಯಲ್ಲಿ ಸರ್ಕಾರದಿಂದ ನಿರ್ದೇಶನ ಇರುವುದಿಲ್ಲ. |

ಸಂಖ್ಯೆ: ಎನರ್ಜಿ 267 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು